# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1761

ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿಗೌಡ
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 23.03.2020

ಉತ್ತರಿಸುವ ಸಚಿವರು : ಮಾನ್ಯ ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು.

| ಪ್ರಶ್ನೆ | ಉತ್ತರ |
|---|---|
| ಅ) ರಾಜ್ಯಾದ್ಯಂತ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಗಳ ವ್ಯಾಪ್ತಿಗೆ ಬರುವ ಸಂಸ್ಥೆಗಳು/ಕಾರ್ಖಾನೆಗಳು/ಐಟಿ ಮತ್ತು ಬಿಟಿ ವಲಯಗಳಾವುವು; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಾದ್ಯಂತ ಸುಮಾರು 5500 ಐಟಿ ಕಂಪನಿಗಳು ಮತ್ತು ಅಂದಾಜು 300 ಬಿಟಿ ಕಂಪನಿಗಳು ಕಾರ್ಯ ನಿರ್ವಹಿಸುತ್ತಿವೆ. ಈ ಐಟಿ ಮತ್ತು ಬಿಟಿ ಕಂಪನಿಗಳು ಖಾಸಗಿಯಾಗಿರುವುದರಿಂದ ಇಲಾಖೆಯ ನಿಯಂತ್ರಣದಡಿ ಬರುವುದಿಲ್ಲ.<br><br>ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸಂಸ್ಥೆಗಳು:-<br>1. ಕಿಯೋನಿಕ್ಸ್ (ಸಾರ್ವಜನಿಕ ನಿಗಮ)<br>2. ಕರ್ನಾಟಕ ನಾವಿನ್ಯತೆ ಮತ್ತು ತಂತ್ರಜ್ಞಾನ ಸೊಸೈಟಿ (ಕಿಟ್ಸ್)<br><br>ಇದಲ್ಲದೇ, ಇಲಾಖೆಯ ವತಿಯಿಂದ ಈ ಕೆಳಕಂಡ ಸಂಸ್ಥೆಗಳಿಗೆ ಸರ್ಕಾರದಿಂದ ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ.<br>1. ಇನ್ಸ್ ಟಿಟ್ಯೂಟ್ ಆಫ್ ಬಯೋ ಇನ್ಫಾರ್ಮೇಟಿಕ್ಸ್ ಅಂಡ್ ಅಪ್ಲೈಡ್ ಬಯೋಟೆಕ್ನಾಲಜಿ (ಐಬಿಎಬಿ)<br>2. ಬೆಂಗಳೂರು ಬಯೋ ಇನ್ನೋವೇಷನ್ ಸೆಂಟರ್ (ಬಿಬಿಸಿ)<br>3. ಐಐಐ-ಟಿ, ಬೆಂಗಳೂರು<br>4. ಐಐಐ-ಟಿ, ಧಾರವಾಡ<br>5. ಐಐಐ-ಟಿ ರಾಯಚೂರು<br>6. ಮಾನವ ತಳಿ ಶಾಸ್ತ್ರ ಕೇಂದ್ರ (ಸಿಹೆಚ್ ಜಿ)<br><br>ಪ್ರಸ್ತುತ ಹುಬ್ಬಳ್ಳಿಯಲ್ಲಿ ಇಲಾಖೆಯ ಅಧೀನದಲ್ಲಿ ಒಂದು ಮಾಹಿತಿ ತಂತ್ರಜ್ಞಾನ ಪಾರ್ಕ್ ಇದ್ದು, ಸದರಿ ಪಾರ್ಕ್‌ನಲ್ಲಿ ಸುಮಾರು 57 ಐಟಿ/ ಐಟಿಇಎಸ್ ಕಂಪನಿಗಳು ಕಾರ್ಯ ನಿರ್ವಹಿಸುತ್ತಿವೆ.<br>• ಕಿಯೋನಿಕ್ಸ್ ಒಡೆತನದಲ್ಲಿ ಶಿವಮೊಗ್ಗದಲ್ಲಿ ಇರುವ ಐಟಿ ಪಾರ್ಕ್‌ನಲ್ಲಿ 12 ಐಟಿ/ಐಟಿಇಎಸ್ ಕಂಪನಿಗಳು<br>• ಕಲಬುರ್ಗಿಯಲ್ಲಿ ಇರುವ ಐಟಿ ಪಾರ್ಕ್‌ನಲ್ಲಿ ಸುಮಾರು 9 ಐಟಿ/ ಐಟಿಇಎಸ್ ಕಂಪನಿಗಳು ಕಾರ್ಯನಿರ್ವಹಿಸುತ್ತಿವೆ. |

| | |
|---|---|
| | ರಾಜ್ಯದಲ್ಲಿರುವ ಐಟಿ/ಐಟಿಇಎಸ್, ಬಿಟಿ, ಇಎಸ್‌ಡಿಎಮ್, ಎವಿಜಿಸಿ, ಸ್ಟಾರ್ಟ್‌ಅಪ್ ಇತ್ಯಾದಿ ಕಂಪನಿಗಳು ಸರ್ಕಾರವು ಘೋಷಿಸಿರುವ ನೀತಿಯಲ್ಲಿರುವ ಉತ್ತೇಜನಗಳನ್ನು ಪಡೆಯುವ ಸಲುವಾಗಿ ಮಾತ್ರ ಇಲಾಖೆಯಲ್ಲಿ ನೋಂದಣಿ ಮಾಡಿಕೊಳ್ಳುತ್ತವೆ.<br><br>ಇಲಾಖೆಯಲ್ಲಿ ಇಲ್ಲಿಯವರೆಗೆ 468 ಐಟಿ/ಐಟಿಇಎಸ್ ಕಂಪನಿಗಳು ಹಾಗೂ 24 ಐಟಿ/ಐಟಿಇಎಸ್ ಪಾರ್ಕ್ ಗಳು ಹಾಗೆಯೇ 55 ಬಿಟಿ ಕಂಪನಿಗಳು ನೋಂದಣಿಯಾಗಿರುತ್ತವೆ. |
| ಆ) ಈ ಸಂಸ್ಥೆಗಳ ಉದ್ಯೋಗಕ್ಕಾಗಿ ಸರ್ಕಾರ ವಿಧಿಸಿರುವ ನಿಯಮಗಳಾವುವು; ಈ ಸಂಸ್ಥೆಗಳು ಪಾಲಿಸಬೇಕಾದ ಮಾನದಂಡಗಳಾವುವು? (ವಿವರ ನೀಡುವುದು) | ಸರ್ಕಾರವು ಪ್ರಕಟಿಸಿರುವ ವಿವಿಧ ನೀತಿಗಳ ಅಡಿಯಲ್ಲಿ ಐಟಿ, ಐಟಿಇಎಸ್, ನಾಲೆಡ್ಜ್, ಸ್ಟಾರ್ಟ್‌ಅಪ್, ಅನಿಮೇಷನ್, ಗೇಮಿಂಗ್, ಕಂಪ್ಯೂಟರ್ ಗ್ರಾಫಿಕ್ಸ್, ಟೆಲಿಕಾಂ, ಬಿಪಿಒ, ಕೆಪಿಒ ಇತರೆ ಜ್ಞಾನಾಧಾರಿತ ಕಂಪನಿಗಳಿಗೆ ಐದು ವರ್ಷಗಳ ಅವಧಿಗೆ ಕರ್ನಾಟಕ ಕೈಗಾರಿಕಾ ಉದ್ಯೋಗ (Standing orders) ನಿಯಮ-1946 ಅನ್ವಯವಾಗುವುದಿಲ್ಲ. ಇದಲ್ಲದೇ ಮಹಿಳಾ ನೌಕರರ ರಕ್ಷಣೆ ಮತ್ತು ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳವನ್ನು ತಡೆಗಟ್ಟಲು ಸೂಕ್ತ ಷರತ್ತುಗಳನ್ನು ವಿಧಿಸಲಾಗಿದೆ.<br><br>ಜೊತೆಗೆ, ಇಲಾಖೆಯಲ್ಲಿ ನೋಂದಣಿಯಾದ ಐಟಿ/ಬಿಟಿ ಕಂಪನಿಗಳಿಗೆ ಸ್ಟಾಂಪ್ ಶುಲ್ಕದಲ್ಲಿ ಹಾಗೂ ವಿದ್ಯುಚ್ಛಕ್ತಿ ದರದಲ್ಲಿ ವಿನಾಯಿತಿ ನೀಡಲಾಗುತ್ತಿದೆ.<br><br>ರಾಜ್ಯದಲ್ಲಿರುವ ಐಟಿ ಮತ್ತು ಬಿಟಿ ಕಂಪನಿಗಳಿಗೆ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಇಲಾಖೆಯಿಂದ ಪ್ರತ್ಯೇಕವಾಗಿ ಯಾವುದೇ ಮಾನದಂಡವನ್ನು ಅಥವಾ ನಿರ್ಬಂಧಗಳನ್ನು ವಿಧಿಸಿರುವುದಿಲ್ಲ.<br><br>ಈ ಸಂಸ್ಥೆಗಳು ಆಯಾ ಸಂಸ್ಥೆಗಳಲ್ಲಿರುವ ಮಾನವ ಸಂಪನ್ಮೂಲ ನೇಮಕಾತಿ ನೀತಿಯನ್ವಯ ತಮ್ಮ ನೇಮಕಾತಿಗಳನ್ನು ಮಾಡಿಕೊಳ್ಳುತ್ತವೆ. |

**(ಡಾ. ಅಶ್ವಥ್ ನಾರಾಯಣ ಸಿ. ಎನ್)**
ಉಪಮುಖ್ಯಮಂತ್ರಿಗಳು ಹಾಗೂ ವಿದ್ಯುನ್ಮಾನ,
ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು.

**ಸಂಖ್ಯೆ: ಐಟಿಬಿಟಿ 24ಎಲ್‌ಸಿಎಂ 2020**